## ಕರ್ನಾಟಕ ವಿಧಾನ ಪರಿಷತ್ತು

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1440
2] ಮಾನ್ಯ ಸದಸ್ಯರ ಹೆಸರು : ಶ್ರೀ ಐವಾನ್ ಡಿಸೋಜಾ (ನಾಮನಿರ್ದೇಶನ
: ಹೊಂದಿದವರು)
3] ಉತ್ತರಿಸುವ ದಿನಾಂಕ : 19.03.2020
4] ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪೊಲೀಸ್ ಅಧೀಕ್ಷಕರ ಕಛೇರಿಯನ್ನು ಮಂಗಳೂರು ನಗರದಿಂದ ಹೊರಭಾಗಕ್ಕೆ ವರ್ಗಾಯಿಸಲು ಸರ್ಕಾರ ಕ್ರಮ ಕೈಗೊಳ್ಳುವುದಾಗಿ ತಿಳಿಸಿದ್ದರೂ ಕಾರ್ಯಗತಗೊಳ್ಳದೇ ಇರಲು ಕಾರಣಗಳೇನು; (ವಿವರ ನೀಡುವುದು)</td><td>ಆಡಳಿತಾತ್ಮಕ ಹಿತದೃಷ್ಟಿಯಿಂದ ಪೊಲೀಸ್ ಅಧೀಕ್ಷಕರ ಕಛೇರಿಯನ್ನು ಮಂಗಳೂರು ನಗರದಿಂದ ಹೊರಭಾಗಕ್ಕೆ ವರ್ಗಾಯಿಸುವ ಅವಶ್ಯಕತೆ ಕಂಡು ಬಂದಿರುವುದಿಲ್ಲ.</td></tr>
<tr><td>ಆ</td><td>ಪೊಲೀಸ್ ಅಧೀಕ್ಷಕರ ಕಛೇರಿ ನಗರದಲ್ಲಿ ಕಾರ್ಯನಿರ್ವಹಿಸುವುದರಿಂದ ತುರ್ತು ಸಂದರ್ಭಗಳಲ್ಲಿ ತೊಂದರೆಗಳನ್ನು ಅನುಭವಿಸುವುದು ಸರ್ಕಾರದ ಗಮನದಲ್ಲಿದೆಯೇ ;</td><td>ಪೊಲೀಸ್ ಅಧೀಕ್ಷಕರ ಕಛೇರಿ ನಗರದಲ್ಲಿ ಕಾರ್ಯನಿರ್ವಹಿಸುವುದರಿಂದ ಯಾವುದೇ ತೊಂದರೆ ಆಗುತ್ತಿರುವುದಿಲ್ಲ. ತುರ್ತು ಸಂದರ್ಭಗಳಲ್ಲಿ ಪುತ್ತೂರು ಮತ್ತು ಬಂಟ್ವಾಳದಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಉಪಾಧೀಕ್ಷಕರುಗಳು ಮುಂಜಾಗೃತ ಕ್ರಮ ವಹಿಸುತ್ತಿರುತ್ತಾರೆ.</td></tr>
<tr><td>ಇ</td><td>ಪೊಲೀಸ್ ಅಧೀಕ್ಷಕರ ಕಛೇರಿ ನಗರವನ್ನು ಬಿಟ್ಟು ಬಂಟ್ವಾಳದಲ್ಲಿ ತೆರೆಯಬೇಕೆಂಬ ಬೇಡಿಕೆ ಬಗ್ಗೆ ಸರ್ಕಾರ ಪರಿಶೀಲಿಸಿದೆಯೇ ; (ವಿವರ ನೀಡುವುದು)</td><td>ಅಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.</td></tr>
<tr><td>ಈ</td><td>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಖಾಲಿ ಇರುವ ಪೊಲೀಸ್ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು)</td><td>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಖಾಲಿ ಇರುವ ಪೊಲೀಸ್ ಹುದ್ದೆಗಳನ್ನು ಭರ್ತಿ ಮಾಡಲು ಈ ಕೆಳಕಂಡಂತೆ ಕ್ರಮಕೈಗೊಳ್ಳಲಾಗಿದೆ.
<table>
<tr><th>ಹುದ್ದೆ</th><th>ರಿಕ್ತಸ್ಥಾನ</th><th>ಕೈಗೊಂಡಿರುವ ಕ್ರಮ</th></tr>
<tr><td>ಎಎಸ್‌ಪಿ/ಡಿಎಸ್‌ಪಿ</td><td>01</td><td>ವರ್ಗಾವಣೆ ಮೂಲಕ ಭರ್ತಿ ಮಾಡಲಾಗುವುದು</td></tr>
<tr><td>ಪಿಎಸ್‌ಐ</td><td>15</td><td rowspan="2">ದ.ಕ.ಜಿಲ್ಲೆಯಲ್ಲಿ ಖಾಲಿ ಇರುವ 15 ಪಿಎಸ್‌ಐ, 2 ಆರ್‌ಎಸ್‌ಐ ಹುದ್ದೆಗಳು ಸೇರಿದಂತೆ ಪ್ರಸ್ತುತ 603 ಪಿಎಸ್‌ಐ/ ಆರ್‌ಎಸ್‌ಐ ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.</td></tr>
<tr><td>ಆರ್‌ಎಸ್‌ಐ</td><td>02</td></tr>
<tr><td>ಸಿಪಿಸಿ</td><td>84</td><td>ನೇಮಕಾತಿ ಪ್ರಕ್ರಿಯೆ (ದೈಹಿಕ ಪರೀಕ್ಷೆ) ಚಾಲ್ತಿಯಲ್ಲಿರುತ್ತದೆ</td></tr>
<tr><td>ಎಪಿಸಿ</td><td>51</td><td>ನೇಮಕಾತಿಗೆ ಅಧಿಸೂಚನೆ ಹೊರಡಿಸುವ ಸಂಬಂಧ ಹುದ್ದೆಗಳ ವರ್ಗೀಕರಣ ಅಂತಿಮಗೊಳಿಸಿದ್ದು ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.</td></tr>
</table></td></tr>
</table>

**ಹೆಚ್‌ಡಿ 41 ಪಿಓಪಿ 2020**

[ಬಸವರಾಜ ಬೊಮ್ಮಾಯಿ]
ಗೃಹ ಸಚಿವರು